ಜಿ. ವಿಶ್ವನಾಥ್ *
ಎಂ. ಜಿ. ಮಂಜುನಾಥ **

# 'ಸಾಸಲು'ವಿನ ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಹಲವಾರು ನಿವೇಶನಗಳು ಪತ್ತೆಯಾಗಿದ್ದವು. ಅವುಗಳಲ್ಲಿ ಸಾವನದುರ್ಗದ ಇಟ್ಟಿಗೆ ಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣ ಪುರ, ಭಿಲ್ಲನಕೋಟೆ ಬಳಿಯ ಆಲದಹಳ್ಳಿ, ಮಹಿಮ ರಂಗನಬೆಟ್ಟ, ಮೈಲನಹಳ್ಳಿ, ಎಲೆಕ್ಯಾತನಹಳ್ಳಿ, ರಾಮನಗರದ ಹತ್ತಿರದಲ್ಲಿರುವ ಬಸವನಪುರ, ಗಂಗರಾಜರ ಹಳ್ಳಿ, ಕೆಂಜಿಗರಹಳ್ಳಿ, ವಡೇರಹಳ್ಳಿ, ಅರಳೀಮರದ ದೊಡ್ಡಿ ಮುಂತಾದ ಸ್ಥಳಗಳಲ್ಲಿ ನೂರಾರು ಬೃಹತ್ ಶಿಲಾಯುಗದ ಸಮಾಧಿಗಳು ಪತ್ತೆಯಾಗಿದ್ದವು.[1] ಇತ್ತೀಚೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ 'ಸಾಸಲು' ಎಂಬ ಗ್ರಾಮದ ಬಳಿ ಬೃಹತ್‌ಶಿಲಾಯುಗಕ್ಕೆ (ಮೆಗಾಲಿಥಿಕ್ ಏಜ್) ಸೇರಿದ ಐದು ನಿಲುವುಗಲ್ಲುಗಳು (ಮೆನ್‌ಹಿರ್) ಮತ್ತು ಹಲವಾರು ರೇಖಾಚಿತ್ರಗಳು ನಮ್ಮ ಕ್ಷೇತ್ರಕಾರ್ಯದ ವೇಳೆಯಲ್ಲಿ ಪತ್ತೆಯಾದವು.

ಸಾಸಲು ಗ್ರಾಮದ ಉತ್ತರ ದಿಕ್ಕಿನಲ್ಲಿ ಒಂದೂವರೆ ಕಿಲೋಮೀಟರ್ ದೂರದಲ್ಲಿ ಐದು ಅಡಿ ಎತ್ತರ ಹಾಗೂ ಎರಡೂವರೆ ಅಡಿ ಅಗಲದ ಒಂದು ನಿಲುವುಗಲ್ಲಿದೆ (ಮೆನಹಿರ್). ಈ ನಿಲುವುಗಲ್ಲಿನ ಮೇಲೆ ಹಲವಾರು ರೇಖಾಚಿತ್ರಗಳಿವೆ. ಅವುಗಳಲ್ಲಿ ಕೆಲವು ಯಾವುದೇ ಅರ್ಥವನ್ನು ಸೂಚಿಸದಂತಹ ವಿಚಿತ್ರವಾದ ಚಿತ್ರಗಳು, ಕೆಲವು ಶಂಕುವಿನ ಆಕಾರದ ಚಿತ್ರಗಳು, ವಿಚಿತ್ರವಾದ ದಳಗಳಂತಹ ಚಿತ್ರಗಳು,


ಆಲದಹಳ್ಳಿಯ ಬೃಹತ್ ಶಿಲಾಯುಗದ ಸಮಾಧಿಗಳು


ಸಾಸಲಿನ ಕದರಿಕಂಭದಗುಟ್ಟೆಯಲ್ಲಿನ ರೇಖಾಚಿತ್ರಗಳು

* ಸಾಸಲು, ದೊಡ್ಡಬಳ್ಳಾಪುರ ತಾಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ
** ನಂ. ೨೧೫, ೪ನೇ ಮುಖ್ಯರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು-೫೬೦ ೦೬೦

1 ಎಂ. ಜಿ. ಮಂಜುನಾಥ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನವಶೋಧಿತತ ಬೃಹತ್ ಶಿಲಾ ನಿವೇಶನಗಳು ಇತಿಹಾಸ ದರ್ಶನ, ಸಂ. ೧೦, ಪುಟ ೧೮

ಮತ್ತು ಅವುಗಳ ಮೇಲ್ಭಾಗದಲ್ಲಿ ಚೌಕಳಿ ಮನೆಗಳ ಚಿತ್ರಗಳಿವೆ. ಈ ನಿಲುವುಗಲ್ಲು ಕೆಳಭಾಗದಲ್ಲಿ ಅಗಲವಾಗಿದ್ದು, ಮೇಲ್ಭಾಗದಲ್ಲಿ ಕ್ರಮೇಣ ಚಿಕ್ಕದಾಗಿದ್ದು ಕಠಾರಿಯ ಆಕಾರದಲ್ಲಿದೆ.



ಸಾಸಲಿನಲ್ಲಿ ಪತ್ತೆಯಾದ ಶಿಲಾಯುಗದ ನಿಲುವುಗಲ್ಲು

ಸಾಸಲಿನ ದಕ್ಷಿಣ ದಿಕ್ಕಿನಲ್ಲಿ ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿನ 'ತೋಡಲು ಬಂಡೆ' ಎಂಬ ಗುಡ್ಡದ ಪೂರ್ವ ದಿಕ್ಕಿನಲ್ಲಿ ಮೂರು ನಿಲುವುಗಲ್ಲುಗಳಿವೆ. ಇವುಗಳಲ್ಲಿ ಮೊದಲನೆಯದು ಹನ್ನೆರಡು ಅಡಿ ಎತ್ತರ, ಹಾಗೂ ಮೂರು ಅಡಿ ಅಗಲವಾಗಿದೆ. ಎರಡನೆಯದು ಹತ್ತು ಅಡಿ ಎತ್ತರ, ಎರಡೂವರೆ ಅಡಿ ಅಗಲವಾಗಿದೆ. ಮೂರನೆಯದು ಎಂಟು ಅಡಿ ಎತ್ತರ ಮೂರು ಅಡಿ ಅಗಲವಾಗಿದೆ. ಈ ಮೂರು ನಿಲುವುಗಲ್ಲುಗಳಲ್ಲಿ ಮೊದಲ ಎರಡು ನಿಲುವುಗಲ್ಲುಗಳು ಒಂದು ಮತ್ತೊಂದರಿಂದ ಆರು ಅಡಿಗಳಷ್ಟು ದೂರದಲ್ಲಿದೆ. ಇವುಗಳಿಂದ ಸುಮಾರು ಮೂವತ್ತೈದು ಅಡಿಗಳಷ್ಟು ದೂರದಲ್ಲಿ ಮೂರನೆಯ ನಿಲುವು ಗಲ್ಲಿದೆ. ಇಲ್ಲಿಂದ ಉತ್ತರಕ್ಕೆ ಒಂದೂವರೆ ಕಿಲೋಮೀಟರ್ ದೂರದಲ್ಲಿ ಮತ್ತೊಂದು ನಿಲುವುಗಲ್ಲಿದೆ. ಇದು ಹತ್ತೊಂಬತ್ತು ಅಡಿ ಎತ್ತರ ಹಾಗೂ ಆರು ಅಡಿ ಅಗಲವಾಗಿದ್ದು ಸ್ವಲ್ಪ ಎಡಭಾಗಕ್ಕೆ ಬಾಗಿದೆ. ಮೇಲ್ನೋಟಕ್ಕೆ ಕಲ್ಲಿನಿಂದ ನಿರ್ಮಿಸಿದ ಖಡ್ಗದಂತೆ ಕಾಣುತ್ತದೆ. ಇದರ ಸಮೀಪದಲ್ಲಿಯೇ ಶಿಲಾವೃತ್ತಗಳುಳ್ಳ ೧೦ ಸಮಾಧಿಗಳಿವೆ. ಈ ಐದೂ ನಿಲುವುಗಲ್ಲುಗಳು ಕಣಶಿಲೆಯ (ಗ್ರಾನೈಟ್) ಚಪ್ಪಡಿಯಿಂದ ನಿರ್ಮಿಸಲ್ಪಟ್ಟಿವೆ.

ಕರ್ನಾಟಕದಲ್ಲಿ ಹಲವಾರು ಸ್ಥಳಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳು ಪತ್ತೆಯಾಗಿದ್ದರೂ ಸಹ ನಿಲುವುಗಲ್ಲುಗಳು ಹೆಚ್ಚಿನ ಸಂಖ್ಯೆಯಲ್ಲಿ ಪತ್ತೆಯಾಗಿರಲಿಲ್ಲ. ಕತ್ತಿರಾಜಪುರ ಮುಂತಾಗಿ ಕ್ವಚಿತ್ತಾಗಿ ಅಲ್ಲೊಂದು ಇಲ್ಲೊಂದು ಪತ್ತೆಯಾಗಿದ್ದವು. ಕರ್ನಾಟಕದ ದಕ್ಷಿಣ ಭಾಗದಲ್ಲಿ ತೀರಾ ಅಪರೂಪವೆನ್ನಿಸುವಷ್ಟು ಕಡಿಮೆ ಸಂಖ್ಯೆಯಲ್ಲಿ ಇವು ಪತ್ತೆಯಾಗಿದ್ದವು. ಬೆಂಗಳೂರು ಜಿಲ್ಲೆಯಲ್ಲಿ ಇದುವರೆಗೂ ಒಂದೂ ನಿಲುವುಗಲ್ಲು ಪತ್ತೆಯಾಗಿರಲಿಲ್ಲ. ಮೊಟ್ಟಮೊದಲ ಬಾರಿಗೆ ಇದೀಗ ಸಾಸಲಿನಲ್ಲಿ ಪತ್ತೆಯಾಗಿರುವುದು ಗಮನಾರ್ಹ ಅಂಶ.

ಈ ನಿಲುವುಗಲ್ಲುಗಳು ದೊರೆತ ಸ್ಥಳದಿಂದ ಎರಡು ಕಿಲೋಮೀಟರ್ ದೂರದಲ್ಲಿ ಅಂದರೆ ಸಾಸಲುಗ್ರಾಮದ ಈಶಾನ್ಯ ದಿಕ್ಕಿನಲ್ಲಿರುವ 'ಕದರಿಕಂಭ'ದ ಗುಡ್ಡದಲ್ಲಿನ ಬಂಡೆಗಳ ಮೇಲೆ ಹದಿನಾಲ್ಕು ರೇಖಾಚಿತ್ರಗಳಿವೆ. ಇವು ಮೂರ್ನಾಲ್ಕು ಚದರಡಿಯ ಕಪ್ಪು ಬಂಡೆಗಲ್ಲುಗಳ ಮೇಲೆ



ಸಾಸಲಿನ ರೇಖಾಚಿತ್ರಗಳ ನಿಲುವುಗಲ್ಲು



ಆರಳೀಮರದ ದೊಡ್ಡಿಯಲ್ಲಿರುವ ಬೃ.ಶಿ. ಯುಗದ ರಂಧ್ರಕೋಣೆಗೋರಿ

ಕಲ್ಲಿನಿಂದಲೇ ಕುಟ್ಟಿ ಕುಟ್ಟಿ ರಚಿಸಿದಂತಹ ಚಿತ್ರಗಳಾಗಿವೆ. ಈ ಚಿತ್ರಗಳಲ್ಲಿ ನವಿಲು, ಆನೆ, ಜಿಂಕೆ, ಮನುಷ್ಯ, ನಕ್ಷತ್ರ ಮುಂತಾದ ಚಿತ್ರಗಳೇ ಅಲ್ಲದೆ ಕೆಲವು ನಾವು ಸರಿಯಾಗಿ ಅರ್ಥೈಸಲಾರದಂತಹ ಚಿತ್ರಗಳೂ ಇವೆ. ಶಿಲಾಯುಗಕ್ಕೆ ಸೇರಿದ ಹಲವಾರು ರೇಖಾಚಿತ್ರಗಳು ಹೊಳಲೂರು, ಕುರುಗೋಡು, ಹಿರೇಬೆಣಕಲ್, ಮಲ್ಲಾಪುರ, ಚಿಕ್ಕರಾಮಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿ, ಕೊಪ್ಪಳ, ಕಲ್ಲೂರು, ಪಿಕ್ಲಿಹಾಳ, ಸಂಗನಕಲ್ಲು, ನವಿಲುತೀರ್ಥ, ಚಂದ್ರವಳ್ಳಿ ಇತ್ಯಾದಿ ಸ್ಥಳಗಳಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಪತ್ತೆಯಾಗಿದ್ದವು. ಬೆಂಗಳೂರು ಜಿಲ್ಲೆಯಲ್ಲಿ ಇದುವರೆಗೆ ಒಂದೂ ರೇಖಾಚಿತ್ರಗವು ಪತ್ತೆಯಾಗಿರಲಿಲ್ಲ. ಇದೀಗ ಮೊಟ್ಟ ಮೊದಲನೆಯ ಬಾರಿಗೆ ನಿಲುವುಗಲ್ಲುಗಳು ಮತ್ತು ರೇಖಾಚಿತ್ರಗಳು ಒಂದೇ ನಿವೇಶನದಲ್ಲಿ ದೊರೆತಿವೆ. ಇವುಗಳೆಲ್ಲವೂ ಬೃಹತ್ ಶಿಲಾಯುಗ (ಮೆಗಾಲಿಥಿಕ್ ಏಜ್)ಕ್ಕೆ ಸೇರಿದ್ದುದೆಂದು ಹಾಗೂ ಇವು ಕ್ರಿ. ಪೂ. ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದವುಗಳೆಂದು ತುಲನಾತ್ಮಕವಾಗಿ ನಿರ್ಧರಿಸಬಹುದು.

○